# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 1323

ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು .

ಉತ್ತರಿಸುವ ದಿನಾಂಕ : 24.12.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಸರ್ಕಾರಿ ಬಸ್ ನಿಲ್ದಾಣಗಳಲ್ಲಿ ಎಲ್ಲಾ ಕಡೆಗಳಲ್ಲಿ ಶೌಚಾಲಯಗಳ ವ್ಯವಸ್ಥೆ, ನೀರಿನ ವ್ಯವಸ್ಥೆ ಕಲ್ಪಿಸಿ ಸ್ವಚ್ಛತೆ ಕಾಪಾಡಲು ಯಾವ ಕ್ರಮ ವಹಿಸಲಾಗಿದೆ; | ಕ.ರಾ.ರ.ಸಾ.ನಿಗಮದ ಬಸ್ ನಿಲ್ದಾಣಗಳಲ್ಲಿ ಶೌಚಾಲಯ ಹಾಗೂ ನೀರಿನ ವ್ಯವಸ್ಥೆ ಕಲ್ಪಿಸಲಾಗಿದೆ. ನಿಗಮದ ವ್ಯಾಪ್ತಿಯಲ್ಲಿ ಒಟ್ಟು 17 ವಿಭಾಗಗಳಿದ್ದು, ಸದರಿ ವಿಭಾಗಗಳ ಅಡಿಯಲ್ಲಿ ಬರುವ ಬಸ್ ನಿಲ್ದಾಣಗಳ ಆವರಣ ಮತ್ತು ಶೌಚಾಲಯ/ ಮೂತ್ರಾಲಯಗಳ ಸ್ವಚ್ಛತಾ ನಿರ್ವಹಣೆಗೆ ವಿಭಾಗವಾರು ಸ್ವಚ್ಛತಾ ಗುತ್ತಿಗೆದಾರರನ್ನು ಟೆಂಡರ್ ಮೂಲಕ ಆಯ್ಕೆ ಮಾಡುವ ಪದ್ಧತಿ ಚಾಲ್ತಿಯಲ್ಲಿರುತ್ತದೆ. ಆಯ್ಕೆಯಾದ ಗುತ್ತಿಗೆದಾರರೊಂದಿಗೆ ವಿಭಾಗಗಳ ಮಟ್ಟದಲ್ಲಿ ಕರಾರು ಒಪ್ಪಂದ ಮಾಡಿಕೊಂಡು, ಬಸ್ ನಿಲ್ದಾಣಗಳಲ್ಲಿ ಸ್ವಚ್ಛತಾ ಕಾರ್ಯವನ್ನು ಉತ್ತಮವಾಗಿ ನಿರ್ವಹಿಸಲಾಗುತ್ತಿದೆ. ಬಸ್ ನಿಲ್ದಾಣಗಳಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ನಿಗಮದ ಅಧಿಕಾರಿಗಳು ನಿಯಮಿತವಾಗಿ ಬಸ್ ನಿಲ್ದಾಣಗಳಿಗೆ ಭೇಟಿ ನೀಡಿ ಸ್ವಚ್ಛತೆಯ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಿದ್ದಾರೆ.<br><br>ಬೆಂ.ಮ.ಸಾ.ಸಂಸ್ಥೆಯಲ್ಲಿ ಒಟ್ಟು 48 ಬಸ್ ನಿಲ್ದಾಣಗಳ ಪೈಕಿ 40 ಬಸ್ ನಿಲ್ದಾಣಗಳಲ್ಲಿ ಶೌಚಾಲಯ ಮತ್ತು ನೀರಿನ ವ್ಯವಸ್ಥೆ ಕಲ್ಪಿಸಲಾಗಿದ್ದು, ಶೌಚಾಲಯಗಳ ಸ್ವಚ್ಛತಾ ನಿರ್ವಹಣೆಯನ್ನು, ಟೆಂಡರ್ ಮೂಲಕ ಆಯ್ಕೆಯಾದ ಅರ್ಹ ಮತ್ತು ಅನುಭವವುಳ್ಳ ಖಾಸಗಿ ಗುತ್ತಿಗೆದಾರರ/ ಪರವಾನಗಿದಾರರ ಮೂಲಕ ಸಂಸ್ಥೆಯೊಂದಿಗೆ ಒಳಪಟ್ಟಿರುವ ಕರಾರಿನ ಅನ್ವಯ ಬಸ್ ನಿಲ್ದಾಣಗಳ ಶೌಚಾಲಯಗಳನ್ನು ಸಮರ್ಪಕವಾಗಿ ನಿರ್ವಹಿಸಲಾಗುತ್ತಿದೆ. ಸದರಿ ಗುತ್ತಿಗೆದಾರರು ಸಾರ್ವಜನಿಕ ಪ್ರಯಾಣಿಕರ ತೃಪ್ತಿಗನುಗುಣವಾಗಿ ಸೇವೆಯನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಇದರ ಮೇಲುಸ್ತುವಾರಿಯನ್ನು ನಿಲ್ದಾಣಾಧಿಕಾರಿಗಳಿಗೆ ನೀಡಲಾಗಿದ್ದು, ಸಮರ್ಪಕ ಸ್ವಚ್ಛತಾ ಕಾರ್ಯ ನಿರ್ವಹಣೆ ಆಧಾರದ ಮೇಲೆ ಪ್ರತಿ ತಿಂಗಳು ಗುತ್ತಿಗೆದಾರರಿಗೆ ಹಣವನ್ನು ಪಾವತಿಸಲಾಗುತ್ತಿದೆ.<br><br>ಉಳಿದ 08 ಚಿಕ್ಕ ಬಸ್ ನಿಲ್ದಾಣಗಳಲ್ಲಿ ಶೌಚಾಲಯಗಳು ಇರುವುದಿಲ್ಲ ಹಾಗೂ ಸದರಿ ಬಸ್ ನಿಲ್ದಾಣದ ಆವರಣ ಸ್ವಚ್ಛತೆಯನ್ನು ಸ್ಥಳೀಯವಾಗಿ ನಿರ್ವಹಿಸಲಾಗುತ್ತಿದೆ. |

| | | |
|---|---|---|
| | | ವಾ.ಕ.ರ.ಸಾ.ಸಂಸ್ಥೆ<br>ಬಸ್ ನಿಲ್ದಾಣ ಮತ್ತು ಶೌಚಾಲಯಗಳ ಸಮರ್ಪಕ ನಿರ್ವಹಣೆಗೆ ಖಾಸಗಿಯವರನ್ನು ಇ-ಟೆಂಡರ್ ಮೂಲಕ ಆಯ್ಕೆ ಮಾಡಿ ಶಾಸನಬದ್ಧ ನಿಯಮಾವಳಿಗಳನ್ವಯ ಸ್ವಚ್ಛತಾ ಕಾರ್ಯವನ್ನು ನಿರ್ವಹಿಸುವ ಪದ್ಧತಿ ಜಾರಿಯಲ್ಲಿರುತ್ತದೆ. ಗುತ್ತಿಗೆದಾರರು ಇಲ್ಲದ ಬಸ್ ನಿಲ್ದಾಣಗಳಲ್ಲಿ ಸ್ಥಳೀಯ ವ್ಯವಸ್ಥೆಯಡಿ ಸ್ವಚ್ಛತೆಯನ್ನು ನಿರ್ವಹಿಸಲಾಗುತ್ತಿದೆ.<br>ಕ.ಕ.ರ.ಸಾ.ನಿಗಮದ<br>ನಿಗಮದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ತಾಲ್ಲೂಕು/ಜಿಲ್ಲಾ ಬಸ್ ನಿಲ್ದಾಣಗಳಲ್ಲಿ ಶೌಚಾಲಯ ಹಾಗೂ ನೀರಿನ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.<br>ಬಸ್ ನಿಲ್ದಾಣಗಳಲ್ಲಿನ ಮೂತ್ರಾಲಯ ಮತ್ತು ಶೌಚಾಲಯಗಳ ಸ್ವಚ್ಛತೆ ಮತ್ತು ನಿರ್ವಹಣೆಗಾಗಿ, ನಿಗಮದ ನಿಯಮಾವಳಿಗಳ ಪ್ರಕಾರ ಗುತ್ತಿಗೆದಾರರನ್ನು ಆಯ್ಕೆ ಮಾಡಲಾಗುತ್ತಿದೆ. ಸದರಿ ಗುತ್ತಿಗೆದಾರರು ನಿಲ್ದಾಣದಲ್ಲಿನ ಶೌಚಾಲಯ/ ಮೂತ್ರಾಲಯಗಳನ್ನು ಪ್ರತಿದಿನ ಸ್ವಚ್ಛಗೊಳಿಸಿ, ಸೋಂಕು ನಿವಾರಕ ಸಿಂಪಡಿಸಿ ಸ್ವಚ್ಛಗೊಳಿಸುವುದು. ಮೂತ್ರಾಲಯದ ಮೂತ್ರಿಗಳಲ್ಲಿ ನ್ಯಾಫ್ಥಲೀನ್ ಗುಳಿಗೆಗಳನ್ನು ಇರಿಸಿ ಸ್ವಚ್ಛತಾ ನಿರ್ವಹಣೆಯನ್ನು ಮಾಡಿಸಲಾಗುತ್ತಿದೆ. |
| ಆ. | ಶೌಚಾಲಯಗಳಲ್ಲಿ ಸರ್ಕಾರ ನಿಗದಿಪಡಿಸಿರುವ ದರವಲ್ಲದೆ ಹೆಚ್ಚು ಶುಲ್ಕಗಳನ್ನು ಸಾರ್ವಜನಿಕರಿಂದ ವಸೂಲು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದಲ್ಲಿ, ಇದನ್ನು ತಡೆಗಟ್ಟಲು ಸರ್ಕಾರ ತೆಗೆದುಕೊಂಡ ಕ್ರಮವೇನು; | ಸಾರಿಗೆ ಸಂಸ್ಥೆಗಳ ಬಸ್ ನಿಲ್ದಾಣಗಳಲ್ಲಿ ಮೂತ್ರಾಲಯ ಬಳಕೆ ಉಚಿತವಿದ್ದು, ಶೌಚಾಲಯ ಬಳಕೆಗೆ ದರವನ್ನು ನಿಗದಿಪಡಿಸಿ, ಎಲ್ಲಾ ಶೌಚಾಲಯಗಳಲ್ಲಿ ಈ ಬಗ್ಗೆ ಸಾರ್ವಜನಿಕ ಪ್ರಯಾಣಿಕರ ಮಾಹಿತಿಗಾಗಿ ಸೂಕ್ತ ನಾಮಫಲಕಗಳನ್ನು ಅಳವಡಿಸಲಾಗಿದೆ. ಸ್ವಚ್ಛತೆ ಮತ್ತು ಇತರೆ ಸಮಸ್ಯೆಗಳ ಸಂಬಂಧ ದೂರುಗಳು ಬಂದಲ್ಲಿ ನೋಟೀಸ್ ನೀಡಿ ಸದರಿ ನ್ಯೂನ್ಯತೆಗಳಿಗೆ ಗುತ್ತಿಗೆದಾರರಿಗೆ ಕರಾರು ನಿಯಮಾವಳಿಗಳನ್ವಯ ದಂಡ ವಿಧಿಸಲಾಗುತ್ತಿದೆ. ಶೌಚಾಲಯ ಬಳಕೆಯ ಶುಲ್ಕದ ವಿವರಗಳು ಹಾಗೂ ಸಮಸ್ಯೆಗಳ ಸಂಬಂಧ ಸಂಪರ್ಕಿಸಬೇಕಾದ ಮೋಬೈಲ್ ಸಂಖ್ಯೆಯನ್ನೂ ಸಹ ಗೋಡೆಗಳ ಮೇಲೆ ಪ್ರದರ್ಶಿಸಲಾಗಿದೆ. ಅಧಿಕಾರಿಗಳು ನಿಯಮಿತವಾಗಿ ಬಸ್ ನಿಲ್ದಾಣಗಳಿಗೆ ಭೇಟಿ ನೀಡಿ ಈ ಬಗ್ಗೆ ಪರಿಶೀಲಿಸುತ್ತಿರುತ್ತಾರೆ. ಹೆಚ್ಚಿನ ದರ ಆಕರಿಸುತ್ತಿರುವ ಬಗ್ಗೆ ದೂರುಗಳು ಬಂದಲ್ಲಿ, ಸಂಸ್ಥೆಯ ನಿಯಮಾವಳಿಯನ್ವಯ ಕ್ರಮ ಜರುಗಿಸಲಾಗುತ್ತಿದೆ. |
| ಇ. | ಬಸ್ ನಿಲ್ದಾಣಗಳಲ್ಲಿ ಮಹಿಳೆಯವರ ವಿಶ್ರಾಂತಿ ಗೃಹವನ್ನು ನಿರ್ಮಿಸಲಾಗಿದೆಯೇ; ಇಲ್ಲವಾದಲ್ಲಿ, ಈ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? | ಕ.ರಾ.ರ.ಸಾ.ನಿಗಮ<br>ನಿಗಮದ ಪ್ರಮುಖ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ 99 ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳಿರುತ್ತವೆ. |

| | | |
|---|---|---|
| | | ಬೆಂ.ಮ.ಸಾ.ಸಂಸ್ಥೆ<br><br>ಕೇಂದ್ರ ಸರ್ಕಾರದ ನಿರ್ಭಯಾ ಯೋಜನೆಯಡಿ 14 ಬಸ್ ನಿಲ್ದಾಣಗಳಲ್ಲಿ ಮಹಿಳೆಯರಿಗೆ ಅಗತ್ಯ ಸೌಲಭ್ಯಗಳೊಂದಿಗೆ ಪ್ರತ್ಯೇಕವಾದ ವಿಶ್ರಾಂತಿ ಗೃಹವನ್ನು ನಿರ್ಮಿಸಲಾಗಿರುತ್ತದೆ. 4 ಬಸ್ ನಿಲ್ದಾಣಗಳಲ್ಲಿ ವಿಶ್ರಾಂತಿ ಗೃಹವನ್ನು ನಿರ್ಮಿಸುವ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.<br><br>ವಾ.ಕ.ರ.ಸಾ.ಸಂಸ್ಥೆ<br><br>ಸಂಸ್ಥೆಯ ಒಟ್ಟು 175 ಬಸ್ ನಿಲ್ದಾಣಗಳ ಪೈಕಿ 145 ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಕೊಠಡಿ ನಿರ್ಮಿಸಲಾಗಿದೆ. ಬಾಕಿ ಉಳಿದ 30 ಬಸ್ ನಿಲ್ದಾಣಗಳ ಪೈಕಿ 02 ಬಸ್ ನಿಲ್ದಾಣಗಳಲ್ಲಿ ಕಾಮಗಾರಿ ಪ್ರಗತಿಯಲ್ಲಿದ್ದು, ಇನ್ನುಳಿದ 28 ಬಸ್ ನಿಲ್ದಾಣಗಳು ಚಿಕ್ಕಪುಟ್ಟ, ಗ್ರಾಮ ಮಟ್ಟದ ಬಸ್ ನಿಲ್ದಾಣಗಳಿರುವುದರಿಂದ ಸ್ಥಳದ ಅಭಾವದಿಂದ ನಿರ್ಮಿಸಲು ಅವಕಾಶವಿರುವುದಿಲ್ಲ.<br><br>ಕ.ಕ.ರ.ಸಾ.ನಿಗಮ<br><br>ನಿಗಮದ ವ್ಯಾಪ್ತಿಯಲ್ಲಿ ಬರುವ ಒಟ್ಟಾರೆ 154 ಬಸ್ ನಿಲ್ದಾಣಗಳಲ್ಲಿನ ಒಟ್ಟು 123 ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಗೃಹಗಳನ್ನು ನಿರ್ಮಿಸಿಲಾಗಿದೆ.<br><br>ಪ್ರಸ್ತುತ ಕೋವಿಡ್-19ರ ಸಾಂಕ್ರಾಮಿಕ ರೋಗದ ಪಿಡುಗಿನಿಂದಾಗಿ ಸಾರಿಗೆ ಸಂಸ್ಥೆಗಳು ತೀವ್ರ ಆರ್ಥಿಕ ಸಂಕಷ್ಟದಲ್ಲಿರುವುದರಿಂದ, ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಕಷ್ಟಕರವಾಗಿದ್ದು, ಸಂಸ್ಥೆಗಳ ಆರ್ಥಿಕ ಪರಿಸ್ಥಿತಿ ಸುಧಾರಿಸಿದ ನಂತರ ಹಂತಹಂತವಾಗಿ ಮಹಿಳೆಯರ ವಿಶ್ರಾಂತಿ ಗೃಹ ನಿರ್ಮಿಸಲು ಪರಿಶೀಲಿಸಿ ಕ್ರಮ ಜರುಗಿಸಲಾಗುವುದು. |

ಸಂಖ್ಯೆ: ಟಿಡಿ 309 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು